ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | 568(807) |
| ಸದಸ್ಯರ ಹೆಸರು | ಶ್ರೀ. ಅರವಿಂದ್ ಕುಮಾರ್ ಅರಳಿ |
| ಉತ್ತರಿಸುವ ದಿನಾಂಕ | 11-03-2020 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| 1. | ಬೀದರ್ ಜಿಲ್ಲೆಯ ರೈತರು ಅನಾವೃಷ್ಟಿಯಿಂದಾಗಿ ತೀವ್ರವಾಗಿ ಬಳಲುತ್ತಿದ್ದು, ಬೆಳೆ ಪರಿಹಾರ, ಗೊಬ್ಬರ, ಬೀಜ ವಿತರಣೆ, ಕೀಟನಾಶಕ ಮುಂತಾದ ಸಮಸ್ಯೆಗಳಿದ್ದು, ಈ ರೈತರ ಸಮಸ್ಯೆಗಳ ಪರಿಹಾರಕ್ಕಾಗಿ ಸರ್ಕಾರ ತೆಗೆದುಕೊಂಡ ಕ್ರಮವೇನು? | ಬೀದರ್ ಜಿಲ್ಲೆಯ ರೈತರಿಗಾಗಿ ಗೊಬ್ಬರ, ಬಿತ್ತನೆ ಬೀಜ ಹಾಗೂ ಕೀಟನಾಶಕ ಒದಗಿಸಲು ಸೂಕ್ತ ಕ್ರಮ ವಹಿಸಲಾಗಿದೆ.<br><br>ಪ್ರತಿ ವಾರ ರಸಗೊಬ್ಬರ ತಯಾರಕ ಸಂಸ್ಥೆಯೊಡನೆ ಸಭೆ ನಡೆಸಿ ಪ್ರತಿ ದಿನ ಜಿಲ್ಲೆಗಳಿಗೆ ಸರಬರಾಜಾಗುತ್ತಿದ್ದ ರಸಗೊಬ್ಬರದ ಮಾಹಿತಿ ಪಡೆದು, ಜಿಲ್ಲೆಯಲ್ಲಿರುವ ಸಹಕಾರ ಸಂಘಗಳು ಹಾಗೂ ಖಾಸಗಿ ಮಾರಾಟ ಮಳಿಗೆಗಳ ಮೂಲಕ ರಸಗೊಬ್ಬರಗಳ ಲಭ್ಯತೆಯಲ್ಲಿ ತೊಂದರೆಯಾಗದಂತೆ ಸೂಕ್ತ ವ್ಯವಸ್ಥೆ ಮಾಡಲಾಗಿದೆ.<br><br>ಬೀದರ್ ಜಿಲ್ಲೆಗೆ ಫೆಬ್ರುವರಿ-2020ರ ಅಂತ್ಯಕ್ಕೆ 57,233 ಮೆ.ಟನ್ ವಿವಿಧ ರಸಗೊಬ್ಬರಗಳ (ಯೂರಿಯಾ- 14,601 ಟನ್, ಡಿ.ಎ.ಪಿ -24,670 ಟನ್, ಎಂ.ಒ.ಪಿ – 5548 ಟನ್, ಕಾಂಪ್ಲೆಕ್ಸ್ – 11,245 ಟನ್ ಮತ್ತು ಇತರೆ-1169 ಟನ್ ಗಳು) ಬೇಡಿಕೆಯಿದ್ದು, ಒಟ್ಟು 31,413 ಮೆ.ಟನ್ (ಯೂರಿಯಾ- 8152 ಟನ್, ಡಿಎಪಿ -13,500 ಟನ್, ಎಂಒಪಿ – 1820 ಟನ್, ಕಾಂಪ್ಲೆಕ್ಸ್ – 7374 ಟನ್ ಗಳು ಮತ್ತು ಇತರೆ-567 ಟನ್ ಗಳು) ರಸಗೊಬ್ಬರಗಳು ಸರಬರಾಜಾಗಿರುತ್ತದೆ.<br><br>ಅಲ್ಲದೆ, ಬೀದರ್ ಜಿಲ್ಲೆಯ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾ ಮಂಡಳದ ಶಾಖೆಯ ಕಾಪು ದಾಸ್ತಾನಿನಡಿ ಇದ್ದ ಡಿ.ಎ.ಪಿ-6698 ಮೆ.ಟನ್, ಯೂರಿಯಾ-900 ಮೆ.ಟನ್, ಕಾಂಪ್ಲೆಕ್ಸ್-200 ಮೆ.ಟನ್, ಎಮ್.ಒ.ಪಿ-350 ಮೆ.ಟನ್ ರಸಗೊಬ್ಬರಗಳನ್ನು ಸಹ ರೈತರಿಗಾಗಿ ಸರಬರಾಜು ಮಾಡಲಾಗಿದೆ.<br><br>ಪ್ರಸ್ತುತ ಬೀದರ್ ಜಿಲ್ಲೆಯಲ್ಲಿ 14,749 ಮೆ.ಟನ್ ಪ್ರಮಾಣದ ವಿವಿಧ ಶ್ರೇಣಿಯ (ಡಿ.ಎ.ಪಿ-12,557 ಮೆ.ಟನ್, ಯೂರಿಯಾ-826 ಮೆ.ಟನ್, ಕಾಂಪ್ಲೆಕ್ಸ್-494 ಮೆ.ಟನ್, ಎಮ್.ಒ.ಪಿ-872 ಮೆ.ಟನ್) ರಸಗೊಬ್ಬರಗಳು ದಾಸ್ತಾನಿರುತ್ತದೆ (ಖಾಸಗಿ, ಸಹಕಾರ ಸಂಘಗಳು ಮತ್ತು ಕಾಪು ದಾಸ್ತಾನು ಸೇರಿದಂತೆ).<br><br>ಹಾಗಾಗಿ ಜಿಲ್ಲೆಯಲ್ಲಿ ರಸಗೊಬ್ಬರದ ಯಾವುದೇ ಕೊರತೆ ಇರುವುದಿಲ್ಲ.<br><br>ಬೀದರ್ ಜಿಲ್ಲೆಯಲ್ಲಿ ಒಟ್ಟು 73 (30 ರೈತ ಸಂಪರ್ಕ ಕೇಂದ್ರ ಹಾಗೂ 43 ಹೆಚ್ಚುವರಿ ಮಾರಾಟ ಕೇಂದ್ರ) |

| | | |
|---|---|---|
| | | ಕೇಂದ್ರಗಳಿಂದ ರಿಯಾಯಿತಿ ಬಿತ್ತನೆ ಬೀಜ ವಿತರಣೆ ಮಾಡಲಾಗಿದೆ. ಬಿತ್ತನೆ ಬೀಜ ಕೇಂದ್ರಗಳಲ್ಲಿ ರೈತರಿಗೆ ಬೀಜ ವಿತರಣೆಯನ್ನು ಸಮರ್ಪಕವಾಗಿ ಬೇಡಿಕೆಗನುಗುಣವಾಗಿ ನಿರ್ವಹಿಸಲಾಗಿದೆ. ಬೀದರ್ ಜಿಲ್ಲೆಗೆ 2019ರ ಮುಂಗಾರು ಹಂಗಾಮಿನಲ್ಲಿ 1.04 ಲಕ್ಷ ಕ್ವಿಂಟಾಲ್ ಬಿತ್ತನೆ ಬೀಜಗಳನ್ನು 1.47 ಲಕ್ಷ ಫಲಾನುಭವಿಗಳಿಗೆ ವಿತರಿಸಲಾಗಿದೆ. 2019-20ರ ಹಿಂಗಾರು/ಬೇಸಿಗೆ ಹಂಗಾಮಿಗೆ 13402 ಕ್ವಿಂಟಾಲ್ ಬಿತ್ತನೆ ಬೀಜಗಳನ್ನು 30167 ಫಲಾನುಭವಿಗಳಿಗೆ ವಿತರಿಸಲಾಗಿದೆ.<br><br>ಪ್ರಸಕ್ತ ಸಾಲಿನಲ್ಲಿ ವಿವಿಧ ಬೆಳೆಗಳಲ್ಲಿ ಕಂಡು ಬಂದಿದ್ದ ಕೀಟರೋಗಗಳ ನಿರ್ವಹಣೆಗೆ ರಾಜ್ಯವಲಯ ಸಸ್ಯ ಸಂರಕ್ಷಣಾ ಯೋಜನೆಯಡಿ ಪೀಡೆನಾಶಕಗಳ ವಿತರಣೆಗೆ ರೂ.102 ಲಕ್ಷಗಳ ಮತ್ತು ಜಿಲ್ಲಾವಲಯ ಸಸ್ಯ ಸಂರಕ್ಷಣಾ ಯೋಜನೆ ರೈತರಿಗೆ ಸಹಾಯ ಕಾರ್ಯಕ್ರಮದಡಿ ರೂ.2 ಲಕ್ಷಗಳ ಅನುದಾನವನ್ನು ಸಸ್ಯ ಸಂರಕ್ಷಣಾ ಉಪಕರಣಗಳ ವಿತರಣೆಗೆ ಬೀದರ್ ಜಿಲ್ಲೆಗೆ ಬಿಡುಗಡೆಗೊಳಿಸಲಾಗಿದೆ.<br><br>ರಾಷ್ಟ್ರೀಯ ಆಹಾರ ಭದ್ರತಾ ಯೋಜನೆಯಡಿ ರೂ.41.62 ಲಕ್ಷದ ಲಘು ಪೋಷಕಾಂಶಗಳನ್ನು, ರೂ.142.08 ಲಕ್ಷದ ಕೀಟನಾಶಕ ವಿತರಣೆ, ರೂ.40.87 ಲಕ್ಷದ ಕೃಷಿ ಯಂತ್ರೋಪಕರಣಗಳು ಹಾಗೂ ರೂ.175.47 ಲಕ್ಷದ ಸಮರ್ಥ ನೀರಾವರಿ ಸಾಧನಗಳನ್ನು ಸಹಾಯಧನದಲ್ಲಿ ಜಿಲ್ಲೆಯಲ್ಲಿ ವಿತರಿಸಲಾಗಿದೆ.<br><br>ಪ್ರಸಕ್ತ ಸಾಲಿನಲ್ಲಿ ಹಿಂಗಾರು ಹಂಗಾಮಿನಲ್ಲಿ ಬರಪೀಡಿತ ತಾಲ್ಲೂಕುಗಳ ಘೋಷಣೆಯಾಗದೇ ಇರುವುದರಿಂದ ಬೀದರ್ ಜಿಲ್ಲೆಯ ರೈತರಿಗೆ ಬೆಳೆ ಹಾನಿಗೆ ಇನ್ ಪುಟ್ ಸಬ್ಸಿಡಿ ನೀಡಲು ಅವಕಾಶವಿರುವುದಿಲ್ಲ. |

**ಸಂಖ್ಯೆ: ಕೃಇ/ಕೃಇಕ/38/2020**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು